# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1281

ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ಸಚಿವರು : ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 24-12-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಸಾರಿಗೆ ಇಲಾಖೆಯಲ್ಲಿ ಒಟ್ಟು ಖಾಲಿ ಇರುವ ಹುದ್ದೆಗಳೆಷ್ಟು; (ಹುದ್ದೆಗಳ ವಿವರ ಒದಗಿಸುವುದು) | ರಾಜ್ಯದ ಸಾರಿಗೆ ಇಲಾಖೆಯಲ್ಲಿ ದಿನಾಂಕ: 01-11-2021 ರಲ್ಲಿರುವಂತೆ ಒಟ್ಟು 1565 ಹುದ್ದೆಗಳು ಖಾಲಿ ಇರುತ್ತವೆ. ಹುದ್ದೆಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.. |
| ಆ. | ಸರ್ಕಾರಕ್ಕೆ ಆದಾಯದ ಮೂಲವಾಗಿರುವ ಸಾರಿಗೆ ಇಲಾಖೆಯಲ್ಲಿ ಹುದ್ದೆಗಳನ್ನು ಭರ್ತಿ ಮಾಡದಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಮುಂಬಡ್ತಿಗೆ ಮೀಸಲಿರುವ ಹುದ್ದೆಗಳನ್ನು ಮುಂಬಡ್ತಿ ನೀಡುವ ಮೂಲಕ ಭರ್ತಿ ಮಾಡಲಾಗುತ್ತಿರುತ್ತದೆ.<br><br>ಅಲ್ಲದೇ, ನೇರ ನೇಮಕಾತಿಗೆ ಮೀಸಲಿರುವ ಹುದ್ದೆಗಳನ್ನು ಭರ್ತಿ 0ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಲಾಗಿರುತ್ತದೆ. ಆದಾಗ್ಯೂ ಕಾನೂನು ಸಲಹೆಗಾರರು, ವೆಬ್ ಪ್ರೋಗ್ರಾಮರ್, ಡಾಟಾ ಎಂಟ್ರಿ ಆಪರೇಟರ್, ತಾಂತ್ರಿಕ ಸಲಹೆಗಾರರು, ಕ್ಲರ್ಕ್ ಕಂ ಟೈಪಿಸ್ಟ್, ಸಮಾಲೋಚಕರು ಮತ್ತು ವಾಹನ ಚಾಲಕರುಗಳ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆದು, ಸಾರ್ವಜನಿಕರ ಕೆಲಸ ಕಾರ್ಯಗಳಲ್ಲಿ ವಿಳಂಬವಾಗದಂತೆ ಹಾಗೂ ಸರ್ಕಾರದ ಬೊಕ್ಕಸಕ್ಕೆ ರಾಜಸ್ವ ನಷ್ಟವಾಗದಂತೆ ಕ್ರಮ ವಹಿಸಲಾಗುತ್ತಿದೆ. |

| | | |
|---|---|---|
| ಇ. | ಖಾಲಿ ಇರುವ ಹುದ್ದೆಗಳನ್ನು ತುಂಬಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಸಾರಿಗೆ ಇಲಾಖೆಯಲ್ಲಿ ಖಾಲಿಯಿರುವ ನೇರ ನೇಮಕಾತಿ ಹುದ್ದೆಗಳ ಪೈಕಿ ಮೋಟಾರು ವಾಹನ ನಿರೀಕ್ಷಕರ 150 ಹುದ್ದೆಗಳ ನೇಮಕಾತಿ ಕುರಿತಂತೆ ಕರ್ನಾಟಕ ಲೋಕಸೇವಾ ಆಯೋಗವು ಅಧಿಸೂಚನೆ ಸಂಖ್ಯೆ: ಆರ್(2)609/19-20/ಪಿಎಸ್‌ಸಿ, ದಿನಾಂಕ:04-07-2019 ರಲ್ಲಿ ಒಟ್ಟು 129 ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪಟ್ಟಿಯನ್ನು ಪ್ರಕಟಿಸಿರುತ್ತದೆ. ಅದರಲ್ಲಿ ಉಳಿಕೆ ಮೂಲ ವೃಂದದ 118 ಹುದ್ದೆಗಳು ಹಾಗೂ 11 ಕಲ್ಯಾಣ ಕರ್ನಾಟಕ ಹುದ್ದೆಗಳು ಇರುತ್ತವೆ. ಈ ಸಂಬಂಧ ಮಾನ್ಯ ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 4161-4162/2019 ರಲ್ಲಿ ದಿನಾಂಕ:19-03-2020 ರಂದು ಹೊರಡಿಸಿರುವ ಅಂತಿಮ ತೀರ್ಪಿಗೆ ಸಂಬಂಧಿಸಿ ರಾಜ್ಯ ಸರ್ಕಾರವು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ: 9739/2020 (ಎಸ್-ಕೆಎಟಿ) ಯನ್ನು ದಾಖಲಿಸಲಾಗಿದೆ. ಇದೇ ವಿಷಯಕ್ಕೆ ಸಂಬಂಧಿಸಿದಂತೆ ಬಾಧಿತ ಅಭ್ಯರ್ಥಿಗಳು ಈ ಪ್ರಕರಣವನ್ನು ರಿಟ್ ಪಿಟಿಷನ್ ಸಂಖ್ಯೆ: 6774/2020 ರಲ್ಲಿ ದಾಖಲಿಸಿದ್ದಾರೆ. ಕರ್ನಾಟಕ ಲೋಕಸೇವಾ ಆಯೋಗವೂ ಕೂಡ ಸದರಿ ಪ್ರಕರಣದಲ್ಲಿ ರಿಟ್ ಪಿಟಿಷನ್ ದಾಖಲಿಸಿದೆ. ಈ ಎಲ್ಲಾ ಪ್ರಕರಣಗಳನ್ನು ಒಟ್ಟುಗೂಡಿಸಿ ದಿನಾಂಕ:25-08-2021 ರಂದು ರಿಟ್ ಪಿಟಿಷನ್ ಸಂಖ್ಯೆ: 6774/2020 ರಲ್ಲಿ ಆದೇಶವನ್ನು ಹೊರಡಿಸಲಾಗಿದೆ. ಈ ಪ್ರಕರಣದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ವತಿಯಿಂದ ಅಂತಿಮ ಪಟ್ಟಿಯನ್ನು ನಿರೀಕ್ಷಿಸಲಾಗುತ್ತಿದೆ.<br><br>ಕಲ್ಯಾಣ ಕರ್ನಾಟಕ ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಖಾಲಿಯಾಗಿರುವ 05 ಪ್ರಥಮ ದರ್ಜೆ ಸಹಾಯಕರ ಮತ್ತು 05 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ತುಂಬಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಬೇಡಿಕೆ ಪಟ್ಟಿ ಸಲ್ಲಿಸಲಾಗಿದ್ದು, ಆ ಸಂಬಂಧ ಆಯೋಗವು ಕ್ರಮವಾಗಿ ತನ್ನ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ ಇ(2)3070/2019-20, ದಿನಾಂಕ: 31-01-2020 ಮತ್ತು ಪಿ.ಎಸ್.ಸಿ ಇ(3)801/2019-20, ದಿನಾಂಕ:29-02-2020 ರಂದು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿರುತ್ತದೆ.<br><br>ಈಗಾಗಲೇ ಜಾರಿಯಲ್ಲಿರುವ 150 ಹುದ್ದೆಗಳ ನೇರನೇಮಕಾತಿ ಪ್ರಕ್ರಿಯೆಯನ್ನು ಹೊರತುಪಡಿಸಿ ಉಳಿದಂತೆ 136 ಹುದ್ದೆಗಳು ಹಾಗೂ |